ದುರ್ಗಮ ವಾಕ್ಯಗಳಿಗೆ ವಿಸ್ತಾರವಾಗಿ ಅರ್ಥವನ್ನು ನಿರೂಪಿಸಿ ಭಾಷ್ಯ ಟೀಕೆಗಳಲ್ಲಿ ನಿರೂಪಿತವಾದ ವಿಷಯಗಳು ಅತ್ಯಂತ ಪ್ರಾಮಾಣಿಕವೆಂದು ಓದುಗರಿಗೆ ಮನದಟ್ಟುಮಾಡಿಕೊಡುತ್ತದೆ. ಪರಕೀಯರ ವಾಖ್ಯಾನದಲ್ಲಿ ಪೂರ್ವಾಪರವಿರೋಧ -ಗಳನ್ನು ತೋರಿಸಿ ಆಚಾರ್ಯರ ವ್ಯಾಖ್ಯಾನದ ಅಪೂರ್ವತೆಯನ್ನು ಮನಗಾಣಿಸುತ್ತದೆ. ಪರಮತವಿಮರ್ಶೆಯ ಇವರ ವ್ಯಾಖ್ಯಾನ ವೈಖರಿಯನ್ನು ನೋಡಿದಾಗ ಇವರ ಅಗಾಧ ಪಾಂಡಿತ್ಯದ ಅರಿವಾಗುವದು. ಈಶಾವಾಸ್ಯೋಪನಿಷತ್ತಿನ ''ಅನೇಜದೇಕಂ'' ಎಂಬ ಮಂತ್ರಕ್ಕೆ ವ್ಯಾಖ್ಯಾನ ಮಾಡುವಾಗ ಪರಮತ ವಿಮರ್ಶೆಯನ್ನು ಸೊಗಸಾಗಿ ಮಾಡಿದ್ದಾರೆ. ಅದು ಈ ಕೆಳಗಿನಂತಿದೆ-

''ಅನೇಜದೇಕಂ'' ಎಂಬ ಮಂತ್ರಕ್ಕೆ ಪರರು ಹೇಳುವಂತೆ ಭಗವಂತ ಅನೇಜತ್-ನಿಷ್ಕ್ರಿಯ ಎಂದು ಹೇಳುವಂತಿಲ್ಲ. ಏಕೆಂದರೆ ಆಚಾರ್ಯರು ''ಅನೇಜನ್ನಿರ್ಭಯತ್ವಾತ್'' ಎಂದು ಬ್ರಹ್ಮಾಂಡ ಪುರಾಣದ ಆಧಾರದಲ್ಲಿ ನಿರ್ಭಯನಾದ್ದರಿಂದ ಭಗವಂತ ''ಅನೇಜತ್ ಎನಿಸಿದ್ದಾನೆ ಎಂದು ಸಮರ್ಥಿಸಿದ್ದಾರೆ. ಪರರು ಹೇಳಿದ ಅರ್ಥವನ್ನು ಇಟ್ಟುಕೊಂಡರೆ ಮೇಲೆ ಹೇಳಿದ ಪ್ರಮಾಣದ ವಿರೋಧ ಬರುವದು.

ಇದಲ್ಲದೇ ''ಅನೇಜತ್'' ಎಂಬುದಕ್ಕೆ ಭಗವಂತ ನಿಷ್ಕ್ರಿಯ ಎಂಬ ಅರ್ಥವಿಟ್ಟುಕೊಂಡರೆ ''ಮನಸೋ ಜವೀಯಃ'' (ಮನಸ್ಸಿಗಿಂತಲೂ ವೇಗಶಾಲಿ) ಎನ್ನುವದು ಕೂಡಲಾರದು. ಏಕೆಂದರೆ ಕ್ರಿಯಾಶೂನ್ಯವಾದದ್ದು ವೇಗಶಾಲಿಯಾಗಲಾರದು ತಾನೆ. ''ಏಕಂ'' ಎಂದರೆ ದ್ವಿತೀಯವಸ್ತುರಹಿತ ಎಂದು ಪರರು ವ್ಯಾಖ್ಯಾನಿಸುವರು. ಆ ಪಕ್ಷದಲ್ಲಿ ''ನೈನದ್ದೇವಾ ಆಪ್ನುವನ್'' ಎಂಬ ವಚನದ ವಿರೋಧ ಬರುವರು. ಏಕೆಂದರೆ ಅಲ್ಲಿ ದೇವತೆಗಳನ್ನೇ ದ್ವಿತೀಯವಸ್ತುವನ್ನಾಗಿ ಹೇಳಲಾಗಿದೆ. ನರಶೃಂಗದಂತೆ ದೇವತೆಗಳೇ ಇಲ್ಲವೆಂದಾದಲ್ಲಿ ಅಪ್ರಾಪ್ತಪ್ರತಿಷೇಧ ಪ್ರಸಂಗ ಬರುವದರಿಂದ ದೇವತೆಗಳಿಗೂ ಅಗಮ್ಯ ಎಂದು ಬಣ್ಣಿಸುವದು ಶೋಭಿಸಲಾರದಷ್ಟೇ. ''ನೈನದ್ದೇವಾ ಆಪ್ನುವನ್'' ಎಂಬಲ್ಲಿ '' ಸರ್ವಥಾ ಅಗಮ್ಯತ್ವವು ಅಭಿಮತವೆಂದು ಹೇಳಿದ ಪಕ್ಷದಲ್ಲಿ'' ತಸ್ಮಿನ್ನಪೋ ಮಾತರಿಶ್ವಾ ದಧಾತಿ'' (ಭಗವಂತನಲ್ಲಿ ಎಲ್ಲ ಕರ್ಮಗಳನ್ನು ವಾಯುದೇವರು ಸಮರ್ಪಿಸುತ್ತಾರೆ) ಎಂಬುದು ಅಯುಕ್ತವೆನಿಸೀತು. ನಿರ್ದುಷ್ಟವೂ ಎಣಿಸಲಶಕ್ಯವೂ ಆದ ಕಲ್ಯಾಣಗುಣಗಳಿಂದ ಅತಿಪರಿಪೂರ್ಣನಾದ್ದರಿಂದ ಪೂರ್ಣವಾಗಿ ಅಗೋಚರನಾದ ಭಗವಂತನನ್ನು ಸರ್ವಥಾ ತಿಳಿಯದೇ ವಾಯುದೇವರು ಅವನಲ್ಲಿ ಸರ್ವಕರ್ಮಗಳನ್ನು ಸಮರ್ಪಿಸುವದು ಉಚಿತವಾಗಲಾರದು.

ಸ್ವಾಭಾವಿಕರೂಪದಿಂದ ಭಗವಂತ ನಿಷ್ಕ್ರಿಯನಾಗಿದ್ದರೂ ಔಪಾಧಿಕರೂಪದಿಂದ ''ಮನಸೋ ಜವೀಯಃ'' ಮನಸ್ಸಿಗಿಂತಲೂ ವೇಗಶಾಲಿಯಾಗಬಹುದು ಆದುದರಿಂದ ವಿರೋಧವಿಲ್ಲ ಎಂದು ಹೇಳುವಂತಿಲ್ಲ. ಮುಖ್ಯಾರ್ಥವನ್ನು ಅಂಗೀಕರಿಸಿದಾಗಲೂ

ವಿರೋಧಶಾಂತಿಯಾಗದಿದ್ದರೆ ಈ ರೀತಿ ಕಲ್ಪನೆ ಮಾಡುವುದು ಉಚಿತ. ಪ್ರಕೃತ ಹಾಗಿಲ್ಲ. ಸಕಲಶ್ರುತಿ ಸ್ಮೃತಿಗಳಿಂದ ಹಾಗೂ ಯುಕ್ತಿಯಿಂದ ಸಿದ್ಧವಾದ ಮುಖ್ಯಾರ್ಥವನ್ನೇ ಪೂಜ್ಯಭಾಷ್ಯಕಾರರು ವಿರೋಧವಿಲ್ಲದೇ ಹೇಳಿರುವದರಿಂದ ಅಮುಖ್ಯಾರ್ಥ-ವನ್ನಂಗೀಕರಿಸುವದು ತರವಲ್ಲ.

**ಕಾಠಕ ವೇದೇಶೀಯ ಟೀಕೆಯ ವೈಶಿಷ್ಟ್ಯ**

ಕಾಠಕೋಪನಿಷದ್‌ಭಾಷ್ಯಕ್ಕೆ ವೇದೇಶತೀರ್ಥರು ರಚಿಸಿರುವ ಟೀಕೆಯು ಅಪೂರ್ವಗಾಂಭೀರ್ಯದಿಂದ ಕೂಡಿದ್ದು ಭಾಷ್ಯದ ಮಹತ್ವವನ್ನು ಜನಸಾಮಾನ್ಯರಿಗೆ ಮನಗಾಣಿಸುವದರಲ್ಲಿ ಯಶಸ್ವಿಯಾಗಿದೆ. ಉಪನಿಷತ್ತಿನ ಕೆಲವು ಪದಗಳಿಗೆ ಆಚಾರ್ಯರು ಭಾಷ್ಯದಲ್ಲಿ ವರ್ಣಿಸಿರುವ ಅರ್ಥ ಇತರ ವ್ಯಾಖ್ಯಾನಕಾರರು ವರ್ಣಿಸಿರುವ ಅರ್ಥಕ್ಕಿಂತಲೂ ವೈಶಿಷ್ಟ್ಯ ಪೂರ್ಣವಾದುದು ಹೇಗೆ? ಎಂಬುದರ ಅರಿವಾಗುವದು ಇವರ ಟೀಕೆಯನ್ನು ಅವಲೋಕಿಸಿದಾಗಲೇ. ಭಾಷ್ಯದಲ್ಲಿ ಮೇಲುನೋಟಕ್ಕೆ ಅನುಪಯುಕ್ತ ಎಂದು ಕಂಡುಬರುವ ಅನೇಕಪದಗಳಿಗೆ ಸೊಗಸಾದ ವಿವರಣೆ ನೀಡಿ ಅವು ಪ್ರಕೃತಕ್ಕೆ ಹೇಗೆ ಉಪಯುಕ್ತ ಎಂಬುದನ್ನು ಸ್ಫುಟಪಡಿಸುತ್ತಾರೆ.

'' ಕಿರಿದೊಳ್ ಪಿರಿದರ್ಥಂ'' ಎಂಬ ಬಿರುದಿಗೆ ಪಾತ್ರವಾದ ಭಾಷ್ಯದ ಸಣ್ಣಸಣ್ಣ ಪದಗಳಲ್ಲಿ ಹುದುಗಿದ ರಹಸ್ಯಾರ್ಥಗಳ ಬಗ್ಗೆ ಇವರ ಟೀಕೆಯು ಕ್ಷಕಿರಣ ಬೀರುತ್ತದೆ. ಭಾಷ್ಯಕ್ಕೆ ವ್ಯಾಖ್ಯಾನ ಮಾಡಿ ''ಅಥ ಖಂಡಾರ್ಥಃ'' ಎಂದು ಆಯಾ ಖಂಡಗಳ ಅರ್ಥವನ್ನು ಪ್ರತ್ಯೇಕವಾದ ಸುಲಲಿತ ಶೈಲಿಯಲ್ಲಿ ಸರಳವಾಗಿ ನಿರೂಪಿಸಿರುವುದು ಅವರ ಟೀಕೆಯಲ್ಲಿ ಎಲ್ಲೆಡೆ ಕಾಣಬಹುದು. ಈ ಟೀಕಾ ವೈಶಿಷ್ಟ್ಯದ ಬಗ್ಗೆ ಒಂದೆರಡು ಉದಾಹರಣೆಗಳನ್ನು ಹೀಗೆ ಗಮನಿಸಬಹುದಾಗಿದೆ.

**''ತ್ರಿಕರ್ಮಕೃತ್'' ಪದಕ್ಕೆ ಸೊಗಸಾದ ಅರ್ಥವಿವರಣೆ.**

ಕಾಠಕೋಪನಿಷತ್ತಿನ ಪ್ರಥಮಾಧ್ಯಾಯದ ಪ್ರಥಮವಲ್ಲಿಯಲ್ಲಿರುವ

ತ್ರಿನಾಚಿಕೇತಸ್ತ್ರಿಭಿರೇತ್ಯ ಸಂಧಿಂ
ತ್ರಿಕರ್ಮಕೃತ್ ತರತಿ ಜನ್ಮಮೃತ್ಯೂ।
ಬ್ರಹ್ಮಜಜ್ಞಂ ದೇವಮೀಡ್ಯಂ ವಿದಿತ್ವಾ
ನಿಚಾಯ್ಯೇಮಾಂ ಶಾಂತಿಮತ್ಯಂತಮೇತಿ ॥

ಎಂಬ ಶ್ಲೋಕದಲ್ಲಿ ಬರುವ 'ತ್ರಿಕರ್ಮಕೃತ್' ಎಂಬುದಕ್ಕೆ (ಇಜ್ಯಾಧ್ಯಯನ ದಾನಾನಾಂ ಕರ್ತಾ '' ಯಾಗ, ಅಧ್ಯಯನ, ದಾನಗಳನ್ನು ಮಾಡುವವ) ಎಂದು ಇತರರು ವ್ಯಾಖ್ಯಾನ ಮಾಡಿದ್ದರೆ ಆಚಾರ್ಯರು ಮಾತ್ರ 'ಯಜ್ಞದಾನತಪಃಕರ್ತಾ' (ಯಜ್ಞದಾನತಪಸ್ಸುಗಳನ್ನು

ಮಾಡುವವ) ಎಂದು ವ್ಯಾಖ್ಯಾನ ಮಾಡಿದ್ದಾರೆ. ಪರರು ಹೇಳಿದ ಅರ್ಥ ಯಾಕಾಗಬಾರದು? ಎನ್ನುವಂತಿಲ್ಲ. ಏಕೆಂದರೆ

"ಯಜ್ಞದಾನತಪಃಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್"

ಎಂಬ ಪ್ರಮಾಣ ವಚನದಲ್ಲಿ ಯಜ್ಞ,ದಾನ ತಪಸ್ಸುಗಳು ಅವಶ್ಯ ಕರ್ತವ್ಯವೆಂದು ಹೇಳಿರುವದರಿಂದ ಆಚಾರ್ಯರ ವ್ಯಾಖ್ಯಾನವೇ ಅತ್ಯಂತ ಸಮರ್ಪಕವೆನಿಸುವದು. ಆದರೆ ಇದರ ಮೇಲೆ ಬರುವ ಪ್ರಶ್ನೆ -- ಅಧ್ಯಯನವೂ ಅವಶ್ಯ ಕರ್ತವ್ಯವೇ ಆಗಿರುವದರಿಂದ "ಇಜ್ಯಾಧ್ಯಯನದಾನಾನಾಂ ಕರ್ತಾ" ಎಂಬ ಪರಕೀಯರ ವ್ಯಾಖ್ಯಾನವೂ ಸಮುಚಿತವೇ ತಾನೆ? ಎಂದು.

ಈ ಪ್ರಶ್ನೆಯನ್ನು ವೇದೇಶತೀರ್ಥರು ತಮ್ಮ ಟೀಕೆಯಲ್ಲಿ ಎತ್ತಿಕೊಂಡು ಹೀಗೆ ಸಮಾಧಾನ ನೀಡಿದ್ದಾರೆ.

"ಅತ್ರ ತಪಃಶಬ್ದಸ್ಯ

**ದೇವದ್ವಿಜಗುರುಪ್ರಾಜ್ಞಪೂಜನಂ ಶೌಚಮಾರ್ಜವಂ ।**
**ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್ ॥**

**ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ ।**
**ಮನಃಪ್ರಸಾದಃ ಸೌಮ್ಯತ್ವಂ ಮೌನಮಾತ್ಮವಿನಿಗ್ರಹಃ ।**
**ಭಾವಸಂಶುದ್ಧಿರಿತ್ಯೇತತ್ ತಪೋ ಮಾನಸಮುಚ್ಯತೇ ॥**

ಇತ್ಯುಕ್ತ ತ್ರಿವಿಧತಪಃಪರತ್ವೇನಾಧ್ಯಯನಸ್ಯಾಪಿ ತದಂತರ್ಗತತ್ವಾದ್ ಇತಿ ಭಾವಃ" ಎಂದು.

ಇಲ್ಲಿ ತಪಃ ಶಬ್ದವು ಶಾರೀರತಪಸ್ಸು, ವಾಙ್ಮಯ ತಪಸ್ಸು, ಮಾನಸತಪಸ್ಸು ಹೀಗೆ ಮೂರನ್ನೂ ಹೇಳುವದು. ಇಲ್ಲಿರುವ ವಾಙ್ಮಯ ತಪಸ್ಸಿನಲ್ಲಿ ಅಧ್ಯಯನವೂ ಸೇರಿರುವದರಿಂದ ಅದನ್ನು ಪ್ರತ್ಯೇಕವಾಗಿ ಹೇಳುವ ಅಗತ್ಯವಿಲ್ಲ. ವೇದೇಶತೀರ್ಥರು ಇದಕ್ಕೆ ಆಧಾರವಾಗಿ ಗೀತೆಯ ಶ್ಲೋಕಗಳನ್ನು ಉದಾಹರಿಸಿ ಆಚಾರ್ಯರು ವರ್ಣಿಸಿರುವ ಅರ್ಥವು ಹೃದಯಾಂತರಾಳದಲ್ಲಿ ಗಟ್ಟಿಯಾಗಿ ಬೇರೂರುವಂತೆ ಮಾಡಿದ್ದಾರೆ.

### *೨. ಭಾಷ್ಯದ ಮಂಗಲಾಚರಣೆಯಲ್ಲಿ ಉಪನಿಷತ್ತಿನ ಸಾರಸಂಗ್ರಹ*

**ಓಂ ನಮೋ ಭಗವತೇ ತಸ್ಮೈ ಸರ್ವತಃ ಪರಮಾಯ ತೇ ।**
**ಸರ್ವಪ್ರಾಣಿಹೃದಿಸ್ಥಾಯ ವಾಮನಾಯ ನಮೋ ನಮಃ ॥**

ಇದು ಕಾಠಕೋಪನಿಷತ್ತಿಗೆ ಆಚಾರ್ಯರು ಬರೆದಿರುವ ಭಾಷ್ಯದ ಮಂಗಲಾಚರಣೆ ಶ್ಲೋಕ. ಇದರಲ್ಲಿ ಪೂರ್ಣ ಉಪನಿಷತ್ತಿನ ಸಾರವನ್ನು ಆಚಾರ್ಯರು ಸೆರೆಹಿಡಿದಿದ್ದಾರೆ. ಇಲ್ಲಿ ವಾಮನರೂಪಿಭಗವಂತನಿಗೆ ೧) ಭಗವತೇ (ಷಡ್‌ಗುಣೈಶ್ವರ್ಯಸಂಪನ್ನನಾದ) ತಸ್ಮೈ = ವೇದಾದಿ ಶಾಸ್ತ್ರಗಳಲ್ಲಿ ಪ್ರಸಿದ್ಧನಾದ ३. ಸರ್ವತಃ ಪರಮಾಯ = ಇಂದ್ರಿಯಗಳಿಂದ ಪ್ರಾರಂಭಿಸಿ ಅವ್ಯಕ್ತ ತತ್ತ್ವದವರೆಗಿನ ಎಲ್ಲ ತತ್ತ್ವಗಳಗಿಂತ ಉತ್ತಮನಾದ ೪) ಸರ್ವಪ್ರಾಣಿಹೃದಿಸ್ಥಾಯ = ಸಕಲ ಪ್ರಾಣಿಗಳ ಹೃದಯದಲ್ಲಿ ನೆಲೆಸಿರುವ ವಾಮನರೂಪಿಯಾದ ನಿನಗೆ ನಮೋನಮಃ ಎಂದು ನಾಲ್ಕು ವಿಶೇಷಣಗಳನ್ನು ಕೊಟ್ಟಿರುತ್ತಾರೆ. 'ಭಗವತೇ' ಎಂಬ ಮೊದಲನೆಯ ವಿಶೇಷಣದಿಂದ '' ಈಶಾನೋ ಭೂತಭವ್ಯಸ್ಯ'' ಎಂದು ಮುಂದೆ ಉಪನಿಷತ್ತಿನಲ್ಲಿ ವರ್ಣಿಸಲಾಗುವ ಷಡ್ಗುಣೈಶ್ವರ್ಯಸಂಪತ್ತಿಯನ್ನು ಸಂಗ್ರಹಿಸಿದ್ದಾರೆ. '' ಬ್ರಹ್ಮಜಜ್ಞಂ'' ಎಂಬಲ್ಲಿ ಭಗವಂತನಿಗೆ ವೇದಾದಿ ಶಾಸ್ತ್ರಪ್ರಸಿದ್ಧಿಯನ್ನು ಹೇಳಲಾಗಿದೆ. ಅದನ್ನು ''ತಸ್ಮೈ'' ಎಂಬ ಎರಡನೇ ವಿಶೇಷಣದಿಂದ ಸಂಗ್ರಹಿಸಲಾಗಿದೆ. ''ಇಂದ್ರಿಯೇಭ್ಯಃ ಪರಾ ಹ್ಯರ್ಥಾಃ'' ಎಂಬಲ್ಲಿ ಭಗವಂತ ಇಂದ್ರಿಯ ತತ್ತ್ವದಿಂದಾರಂಭಿಸಿ ಅವ್ಯಕ್ತತತ್ತ್ವದವರೆಗಿನ ಎಲ್ಲಾ ತತ್ತ್ವಗಳಿಗಿಂತಲೂ ಉತ್ತಮ ಎಂದು ಬಣ್ಣಿಸಲಾಗಿದೆ. ಅದನ್ನು ''ಸರ್ವತಃ ಪರಮಾಯ'' ಎಂಬ ವಿಶೇಷಣದಿಂದ ಸಂಗ್ರಹಸಿದ್ದಾರೆ. ''ವಿದ್ಧಿ ತ್ವಮೇತಂ ನಿಹಿತಂ ಗುಹಾಯಾಂ'' ಎಂಬಲ್ಲಿ ಭಗವಂತ ಸಕಲ ಪ್ರಾಣಿಗಳ ಹೃದಯಗುಹೆಯಲ್ಲಿ ನೆಲಸಿದ್ದಾನೆಂದು ವರ್ಣಿಸಲಾಗಿದೆ. ಅದನ್ನು ''ಸರ್ವಪ್ರಾಣಿಹೃದಿಸ್ಥಾಯ'' ಎಂಬ ವಿಶೇಷಣದಿಂದ ಸಂಗ್ರಹಿಸಿದ್ದಾರೆ. ''ವಾಮನಾಯ'' ಎಂಬದರಿಂದ ಉಪನಿಷತ್ತಿನಲ್ಲಿ ಪ್ರತಿಪಾದ್ಯದೇವತೆಯನ್ನು ಸೂಚಿಸಿದ್ದಾರೆ. ಈ ಉಪನಿಷತ್ತು ಯಮನಚಿಕೇತ ಸಂವಾದರೂಪವಾಗಿರುವದರಿಂದ. ಯಮದೇವರೇ ಇದಕ್ಕೆ ಋಷಿಯೆಂದೂ, ಅಕ್ಷರಗಳ ಪರಿಗಣನೆಯಿಂದ ಛಂದಸ್ಸುಗಳನ್ನು ತಿಳಿಯುವದು ಸುಲಭವೆಂದು ಅವುಗಳನ್ನು ಪ್ರತ್ಯೇಕವಾಗಿ ಹೇಳಿಲ್ಲ ಎಂದು ವೇದೇಶತೀರ್ಥರು ತಮ್ಮ ಟೀಕೆಯಲ್ಲಿ ತಿಳಿಸಿದ್ದಾರೆ.

ವೇದೇಶತೀರ್ಥರು ತಮ್ಮ ಟೀಕೆಯಲ್ಲಿ ಉಪನಿಷತ್ತಿನ ಪದಗಳಗೆ ಅರ್ಥ ಹೇಳುವಾಗ ಅದಕ್ಕೆ ಅನೇಕ ಆಧಾರಗಳನ್ನು ಒದಗಿಸುತ್ತಾರೆ. ಉದಾಹರಣೆಗೆ ''ಉಶನ್ ಹ ವೈ ವಾಜಶ್ರವಸಃ'' ಎಂಬುದನ್ನು ಆಚಾರ್ಯರು '' ಇಚ್ಛನ್ ವಾಜಶ್ರವೋನಪ್ತಾ'' ಎಂದು ವ್ಯಾಖ್ಯಾನಿಸಿದ್ದಾರೆ. ಉಪನಿಷತ್ತಿನಲ್ಲಿರುವ ಉಶನ್ ಪದಕ್ಕೆ ಇಚ್ಛನ್ ಎಂಬುದಾಗಿ ಅರ್ಥವೆಂದು ಆಚಾರ್ಯರು ತಿಳಿಸಿದ್ದಾರೆ. ಈ ಅರ್ಥ ಆ ಶಬ್ದದಿಂದ ಹೇಗೆ ದೊರೆಯುತ್ತದೆ? ಎಂಬುದನ್ನು ತಿಳಿಯಬೇಕಾದರೆ ವೇದೇಶತೀರ್ಥರ ವ್ಯಾಖ್ಯಾನಕ್ಕೆ ಶರಣಾಗಲೇಬೇಕು. ''ಉಶನ್'' ಎಂಬ ಪದವು ''ವಶ ಇಚ್ಛಾಯಾಂ '' ಎಂಬ ಇಚ್ಛಾರ್ಥಕ ವಶಧಾತುವಿನಿಂದ ನಿಷ್ಪನ್ನವಾಗಿದ್ದು ಪ್ರಾರಂಭದ ವಕಾರಕ್ಕೆ ಉಕಾರವು ಬಂದಿದೆ. ಆದ್ದರಿಂದ ಆಚಾರ್ಯರು ಹೇಳಿರುವ ಅರ್ಥವು ಸುಸಂಗತ.

ಅಥವಾ "ಉಶ ಇಚ್ಛಾಯಾಂ" ಎಂಬ ಧಾತುವಿನಿಂದ ಈ ಶಬ್ದ ನಿಷ್ಪನ್ನ ವಾಗಿದೆ ಎಂದಿಟ್ಟುಕೊಂಡರಂತೂ ಈ ಶಬ್ದಕ್ಕೆ ಮೇಲೆ ಹೇಳಿದ ಅರ್ಥ ಸುಸಂಗತವಾಗುತ್ತದೆ. ಅಥವಾ " ವಶ ಕಾಂತೌ" ಎಂಬ ಧಾತುವಿನಿಂದ ಈ ಶಬ್ದ ನಿಷ್ಪನ್ನವಾಗಿದೆ ಎನ್ನಲೂ ಅಡ್ಡಿಯಿಲ್ಲ. ಈ ಪಕ್ಷದಲ್ಲಿ ಕಾಂತಿ ಎಂದರೆ ಇಚ್ಛೆ ಎಂದು ಅರ್ಥ ಎಂದು ಈ ಶಬ್ದಕ್ಕೆ ಈ ಅರ್ಥ ಬರಲು ಮೂರು ಆಧಾರಗಳನ್ನು ನೀಡಿದ್ದಾರೆ.

ಕೆಲವರು ಉಪನಿಷತ್ತಿನಲ್ಲಿರುವ 'ವಾಜಶ್ರವಸಃ" ಎಂಬುದಕ್ಕೆ ವಾಜಶ್ರವ ಎಂಬ ಋಷಿಯ ಮಗ ಎಂದು ವ್ಯಾಖ್ಯಾನ ಮಾಡಿದ್ದಾರೆ. ಅದು ಸರಿಯಲ್ಲ ಎಂದು ತಿಳಿಸುವದಕ್ಕಾಗಿಯೇ ಆಚಾರ್ಯರು ಭಾಷ್ಯದಲ್ಲಿ "ವಾಜಶ್ರವೋನಪ್ತಾ" ಎಂದು ಹೇಳಿದ್ದಾರೆ. ಅಂದರೆ ವಾಜಶ್ರವ ಮಹರ್ಷಿಗಳ ಮರಿಮಗ ಉದ್ದಾಲಕರೇ 'ವಾಜಶ್ರವಸರು' ಎಂದು ಹೇಳಿದಂತಾಗುವದು.

**ವಿರೋಧ ಪರಿಹಾರ**

**ಲೋಕಾದಿಮಗ್ನಿಂ ತಮುವಾಚ ತಸ್ಮೈ**
**ಯಾ ಇಷ್ಟಕಾ ಯಾವತೀರ್ವಾ ಯಥಾ ವಾ ।**
**ಸ ಚಾಪಿ ತತ್ ಪ್ರತ್ಯವದದ್ ಯಥೋಕ್ತಂ**
**ಅಥಾಸ್ಯ ಮೃತ್ಯುಃ ಪುನರಾಹ ತುಷ್ಟಃ ॥**

ಎಂಬ ಮಂತ್ರಕ್ಕೆ ವ್ಯಾಖ್ಯಾನಮಾಡುತ್ತಾ ಇಲ್ಲಿ "ಯಾ ಇಷ್ಟಕಾಃ" ಎಂದರೆ "ಯಾ ಇಷ್ಟಕಾದೇವತಾಃ " ಇಟ್ಟಿಗೆಯಲ್ಲಿ ನಿಯಾಮಕವಾಗಿ ನೆಲಸಿರುವ ಭಗವದ್ರೂಪಗಳು ಎಂದು ವಿವರಿಸಿದ್ದಾರೆ. ಇಟ್ಟಿಗೆಯಲ್ಲಿರುವ ಭಗವದ್ರೂಪಗಳು ಎಷ್ಟು ಎಂಬ ಪ್ರಶ್ನೆಗೆ

**ಇಷ್ಟಕಾದೇವತಾಂ ವಿಷ್ಣುಂ ಷಷ್ಟ್ಯುತ್ತರಶತತ್ರಿಕಂ ।**
**ಯಥಾವದೇವ ವಿಜ್ಞಾಯ ಮುಚ್ಯತೇ ಕರ್ಮಬಂಧನಾತ್ ॥**

ಎಂಬ ಪ್ರಮಾಣವನ್ನುದಾಹರಿಸಿ ಮುನ್ನೂರಾ ಅರವತ್ತು ಎಂದು ಸ್ಪಷ್ಟಪಡಿಸಿದ್ದಾರೆ.

ಇದರ ಮೇಲೆ ಬರುವ ಪ್ರಶ್ನೆ. ಆಚಾರ್ಯರು ಐತರೇಯಭಾಷ್ಯದಲ್ಲಿ " ಅಶೀತ್ಯುತ್ತರಸಹಸ್ರ ರೂಪಂ ವರ್ಣೇಷು ಸಂಸ್ಥಿತಮ್" ಎಂದು ಇಟ್ಟಿಗೆಗಳಲ್ಲಿ ನೆಲಸಿರುವ ಭಗವದ್ರೂಪಗಳ ಸಂಖ್ಯೆ ಸಾವಿರದ ಎಂಭತ್ತು ಎಂದಿದ್ದಾರೆ. "ಅಶೀತಿಸಹಸ್ರಂ ವಾರ್ಕಲಿನಂ" ಎಂಬ ಶ್ರುತಿಯ ಆಧಾರವೂ ಇದಕ್ಕೆ ಇದೆ. ಆದರೆ ಇಲ್ಲಿ ಮುನ್ನೂರ ಅರವತ್ತು ಎಂದಿರುವರು . ಈ ವಿರೋಧವನ್ನು ಪರಿಹರಿಸುವುದು ಹೇಗೆ? ಇದನ್ನು

ವೇದೇಶತೀರ್ಥರು ತಮ್ಮ ಟೀಕೆಯಲ್ಲಿ ಸೊಗಸಾಗಿ ಹೀಗೆ ಪರಿಹರಿಸಿದ್ದಾರೆ. ಐತರೇಯ ಭಾಷ್ಯದಲ್ಲಿ ಹೇಳಿರುವುದು ಕೌಂತರವ್ಯಮುನಿಗಳ ಮತದ ಪ್ರಕಾರ. ಆದ್ದರಿಂದಲೇ ಅಲ್ಲಿ "ಅಥ ಕೌಂತರವ್ಯಃ" ಎಂದು ಪ್ರಾರಂಭ ಮಾಡಿ " ಅಶೀತಿಸಹಸ್ರಂ ವಾರ್ಕಲಿನಂ" ಎಂದು ಹೇಳಲಾಗಿದೆ. ಇಲ್ಲಿ ಹೇಳಿರುವುದು ಬೇರೆ ಋಷಿಯ ಮತದ ಪ್ರಕಾರ. ಆದ್ದರಿಂದ ವಿರೋಧವಿಲ್ಲ.

ಅಥವಾ ಮುನ್ನೂರಾ ಅರವತ್ತು ಇಟ್ಟಿಗೆಗಳಲ್ಲಿ ಒಂದೊಂದರಲ್ಲೂ ಸಾವಿರ ಎಂಭತ್ತು ಭಗವದ್ರೂಪಗಳಿವೆ ಎಂದು ಐತರೇಯ ಭಾಷ್ಯದ ಆಶಯ. ಆದ್ದರಿಂದಲೇ "ರೂಪಾಣಿ ವಿಷ್ಣೋಸ್ತಾವಂತಿ ಚೇಷ್ಟಕಾಸು ಪೃಥಕ್ ಪೃಥಕ್ " ಎಂದು ಪೃಥಕ್ ಶಬ್ದವನ್ನು ಪ್ರಯೋಗಿಸಿದ್ದಾರೆ. ಕಾಠಕೋಪನಿಷದ್ ಭಾಷ್ಯದಲ್ಲಿ ಒಂದೊಂದು ಇಟ್ಟಿಗೆಯಲ್ಲಿನ ಒಂದೊಂದು ಭಗವದ್ರೂಪದ ವಿವಕ್ಷೆ ಇಟ್ಟುಕೊಂಡು ಮುನ್ನೂರ ಅರವತ್ತು ಎಂದಿದ್ದಾರೆ. ಆದ್ದರಿಂದ ವಿರೋಧವಿಲ್ಲ. ಹೀಗೆ ಅನೇಕ ಜಟಿಲ ಸಮಸ್ಯೆಗಳನ್ನು ಬಾಳೇ ಹಣ್ಣು ಸುಲಿದಂತೆ ಸಲೀಸಾಗಿ ಪರಿಹರಿಸಿರುವದನ್ನು ಇವರ ಗ್ರಂಥದ ಉದ್ದಗಲಕ್ಕೂ ಕಾಣಬಹುದಾಗಿದೆ.

## ಮಂಕಾಲಧರ್ಮಾಚಾರ್ಯ ವಿರಚಿತ - "ಷಟ್‌ಪ್ರಶ್ನೋಪನಿಷದ್ ಭಾಷ್ಯಟೀಕಾ ವಿವರಣ"ದ ವೈಶಿಷ್ಟ್ಯ

ಮಂಕಾಲಧರ್ಮಾಚಾರ್ಯರು ರಚಿಸಿರುವ 'ಷಟ್‌ಪ್ರಶ್ನಭಾಷ್ಯಟೀಕಾ ವಿವರಣವು ಓದುಗರಿಗೆ ಉಪಯುಕ್ತವಾದ ಮಾಹಿತಿಯನ್ನು ಅಲ್ಲಲ್ಲಿ ಒದಗಿಸುತ್ತಾ ಟೀಕೆಯ ಜಟಿಲವಾಕ್ಯಗಳನ್ನು ಸಡಿಲಿಗೊಳಿಸುತ್ತದೆ. ಟೀಕಾವಾಕ್ಯ ಹೊರಟ ಹಿನ್ನೆಲೆಯನ್ನು ಸುಂದರವಾಗಿ ನಿರೂಪಿಸಿ ಗ್ರಂಥಾಂತರ ವಿರೋಧಗಳನ್ನು ಪರಿಹರಿಸುತ್ತದೆ. ಭಾಷ್ಯ ಟೀಕೆಗಳ ಪ್ರಮೇಯಗಳನ್ನು ಸುಲಲಿತ ಶೈಲಿಯಲ್ಲಿ ಓದುಗರಿಗೆ ಮನವರಿಕೆ ಮಾಡಿಕೊಡುತ್ತದೆ. ಉಪಲಬ್ಧವಿರುವ ಟಿಪ್ಪಣಿಗಳ ಪೈಕಿ ಇದು ಅತ್ಯಂತ ವಿಸ್ತೃತ ಟಿಪ್ಪಣಿಯಾಗಿದೆ.

ಆರು ಮುನಿಗಳ ಪ್ರಶ್ನೆಗೆ ಉತ್ತರವಾಗಿ ಈ ಉಪನಿಷತ್ತು ಹೊರಟಿರುವದರಿಂದ ಇದಕ್ಕೆ "ಷಟ್‌ಪ್ರಶ್ನೋಪನಿಷತ್" ಎಂದು ಹೆಸರು. ಆರು ಮುನಿಗಳ ಪೈಕಿ ಕೊನೆಯವನು ಕಬಂಧಿ . ಅವನ ಪ್ರಶ್ನೆಯನ್ನು ಪಾಠಕ್ರಮಾನುಸಾರ ಕೊನೆಯಲ್ಲಿ ಪ್ರಸ್ತಾಪಿಸಬೇಕಿದ್ದರೂ ಉಪನಿಷತ್ತಿನಲ್ಲಿ ಮೊದಲೇ ಪ್ರಸ್ತಾಪಿಸಲು ಕಾರಣವೇನು? ಎಂಬ ಪ್ರಶ್ನೆ ಬರುವದು ಸಹಜ. ಇದಕ್ಕೆ ಟೀಕಾಕೃತ್ಪಾದರು "ಪಾಠಕ್ರಮಾದ್ ಅರ್ಥಕ್ರಮೋ ಜ್ಯಾಯಾನ್" ಎಂಬ ನ್ಯಾಯದಂತೆ ಕೊನೆಯವನಾದ ಕಬಂಧಿಕಾತ್ಯಾಯನನ ಪ್ರಶ್ನೆಯನ್ನು ಮೊದಲಿಗೆ ಪ್ರಸ್ತಾಪಿಸಲಾಗಿದೆ ಎಂದಿದ್ದಾರೆ. ಪೂರ್ವಮೀಮಾಂಸಾದಲ್ಲಿ ಉದಾಹೃತವಾದ ಈ ನ್ಯಾಯದ ಸಮಗ್ರ ಚಿತ್ರಣವನ್ನು ಮಂಕಾಲ ಧರ್ಮಾಚಾರ್ಯರು ತಮ್ಮ ಟಿಪ್ಪಣಿಯಲ್ಲಿ ಸೊಗಸಾಗಿ ಮಾಡಿದ್ದಾರೆ.

ಪೂರ್ವಮೀಮಾಂಸಾದ ಪ್ರಥಮಾಧ್ಯಾಯದಲ್ಲಿ ಬರುವ ''ಅರ್ಥಾಚ್ಚ'' (ಜೈಮಿ. ಸೂ. ೨-೧-೪೨) ಎಂಬ ಅಧಿಕರಣದಲ್ಲಿ ''ಅಗ್ನಿಹೋತ್ರಂ ಜುಹೋತಿ ಯವಾಗೂಂ ಪಚತಿ'' ಎಂಬ ಬ್ರಾಹ್ಮಣ ವಾಕ್ಯದ ಅರ್ಥ ನಿರ್ಣಯಕ್ಕಾಗೀ - ಪಾಠಕ್ರಮಾದರ್ಥ ಕ್ರಮೋ ಜಾಯಾನ್' ಎಂಬ ನ್ಯಾಯವನ್ನುದಾಹರಿಸಿದ್ದಾರೆ. ''ಕ್ರಮೇಣ ವಾ ನಿಯಮ್ಯೇತ ಕ್ರತ್ವೇಕತ್ವೇ ತದ್ಗುಣತ್ವಾತ್'' (ಜೈಮಿ.ಸೂ. ೫-೧-೪-೪) ಎಂಬ ಅಧಿಕರಣಧಲ್ಲಿ ಹೇಳಿದಂತೆ ಪಾಠಕ್ರಮವನ್ನಿಟ್ಟು ಕೊಂಡಾಗ ಇಲ್ಲಿ ಅಗ್ನಿಹೋತ್ರ ಹೋಮವೇ ಪ್ರಥಮತಃ ಪ್ರಾಪ್ತವಾಗುವದು ಎಂದು ಪೂರ್ವಪಕ್ಷ ಮಾಡಿಕೊಂಡು ''ಅರ್ಥಾಚ್ಚ'' ಎಂಬುದಾಗಿ ಜೈಮಿನಿ ಮಹರ್ಷಿಗಳು ಸಿದ್ಧಾಂತಮಾಡಿದ್ದಾರೆ. ಇಲ್ಲಿ ಅರ್ಥಾತ್ ಎಂದರೆ ಪ್ರಯೋಜನ ವಶದಿಂದ ಎಂದರ್ಥ. ಹೋಮಕ್ಕೆ ಉಪಯುಕ್ತವಾದ ದ್ರವ್ಯದ ಅಪೇಕ್ಷೆ ಅಗ್ನಿಹೋತ್ರ ಹೋಮಕ್ಕೆ ಇರುವದರಿಂದ ಪಾಠಕ್ರಮ ಅನುಸರಿಸಿ ಯವಾಗೂಪಾಕಕ್ಕಿಂತ ಮೊದಲೇ ಅಗ್ನಿಹೋತ್ರಹೋಮ ಮಾಡಲು ಹೊರಟರೆ ಅಗ್ನಿಹೋತ್ರಹೋಮಕ್ಕೆ ಬೇರೊಂದು ದ್ರವ್ಯದ ಕಲ್ಪನೆ ಮಾಡಬೇಕಾಗುವುದು. 'ಯವಾಗೂಪಾಕ'ದ ನಂತರ 'ಅಗ್ನಿಹೋತ್ರಹೋಮ'ವನ್ನು ಮಾಡಿದರೆ ಅಗ್ನಿಹೋತ್ರಹೋಮಕ್ಕೆ ಬೇರೊಂದು ದ್ರವ್ಯದ ಕಲ್ಪನೆ ಮಾಡಬೇಕಾಗಿಲ್ಲ. ಏಕೆಂದರೆ ಯವಾಗೂವನ್ನು ಅಗ್ನಿಹೋತ್ರಕ್ಕೆ ದ್ರವ್ಯವನ್ನಾಗಿ ಉಪಯೋಗಿಸಬಹುದು. ಇದಲ್ಲದೇ 'ಯವಾಗೂಪಾಕಕ್ಕಿಂತ ಮೊದಲೇ 'ಅಗ್ನಿಹೋತ್ರಹೋಮ ಮಾಡಿದರೆ ನಂತರದ ಯವಾಗೂಪಾಕಕ್ಕೆ ಹೋಮದಲ್ಲಿ ಯಾವರೀತಿಯ ಉಪಯೋಗವೂ ಇಲ್ಲದಿರುವುದರಿಂದ ಅಪೂರ್ವಾರ್ಥತ್ವವನ್ನು ಕಲ್ಪಿಸಬೇಕಾಗುವದು. ಆದ್ದರಿಂದ ಮೊದಲು ಯವಾಗೂಪಾಕ. ಅನಂತರ ಅಗ್ನಿಹೋತ್ರ ಹೋಮ ಎಂದು ಹೇಳುವದೇ ಉತ್ತಮಕಲ್ಪ. ಹಾಗೆಯೇ ಪ್ರಕೃತ ಮೊದಲು ಐವರು ಮುನಿಗಳ ಪ್ರಶ್ನೆಗಳಿಗೆ ಆರನೇ ಮುನಿಯ ಪ್ರಶ್ನೋತ್ತರದ ಅಪೇಕ್ಷೆ ಇರುವದರಿಂದ ವೇದಪುರುಷನು ಆರನೇ ಮುನಿಯ ಪ್ರಶ್ನ ಪ್ರತಿವಚನವನ್ನು ಉಪನಿಷತ್ತಿನಲ್ಲಿ ಮೊದಲಿಗೆ ಅನುವಾದಿಸಿರುವನು. ಆದ್ದರಿಂದ ಇಲ್ಲಿ ಪ್ರಯೋಜನವಿರುವದಿಂದ ಪಾಠಕ್ರಮವನ್ನು ಉಲ್ಲಂಘಿಸಿ ಅರ್ಥಕ್ರಮವನ್ನಿಟ್ಟುಕೊಳ್ಳಲಾಗಿದೆ.

## ಗ್ರಂಥಾಂತರ ವಿರೋಧ ಪರಿಹಾರ

ಈ ಉಪನಿಷತ್ತಿನ 'ದ್ವಿತೀಯ ಪ್ರಶ್ನ ಪ್ರತಿವಚನ' ದಲ್ಲಿ ತತ್ವಾಭಿಮಾನಿ ದೇವತೆಗಳು ಹಾಗೂ ವಾಯುದೇವರ ನಡುವೆ ನಡೆದ ಸ್ಪರ್ಧೆಯ ವೃತ್ತಾಂತ, ಅದರಲ್ಲಿ ವಾಯುದೇವರು ವಿಜಯಿಯಾಗಿದ್ದು ಇದೆಲ್ಲವೂ ವರ್ಣಿತವಾಗಿದೆ. ಇದೇ ವಿಷಯ ಐತರೇಯೋಪನಿಷತ್ತಿನಲ್ಲಿಯೂ ಛಾಂದೋಗ್ಯೋಪನಿಷತ್ತಿ- ನಲ್ಲಿಯೂ ಬಂದಿದೆ. ಆದರೆ ಐತರೇಯೋಪನಿಷತ್ತಿನಲ್ಲಿ ಒಬ್ಬೊಬ್ಬ ತತ್ವಾಭಿಮಾನಿ ದೇವತೆಯ ಉತ್ಕ್ರಮಣದ ತರುವಾಯ ಮುಖ್ಯಪ್ರಾಣನ ಉತ್ಕ್ರಮಣ. ಒಬ್ಬೊಬ್ಬ ತತ್ವಾಭಿಮಾನಿದೇವತೆಯ ಪ್ರವೇಶದ ನಂತರ ಮುಖ್ಯಪ್ರಾಣನ ಪ್ರವೇಶವನ್ನು ಹೇಳಲಾಗಿದೆ. ಆದರೆ ಷಟ್ಪ್ರಶ್ನ ಹಾಗೂ ಛಾಂದೋಗ್ಯದಲ್ಲಿ

ಮೊದಲು ಮುಖ್ಯ ಪ್ರಾಣನ ಉತ್ಕ್ರಮಣ, ಬಳಿಕ ವಿರಾಟ್‌ಶರೀರದಲ್ಲಿ ನಿಲ್ಲಲು ಅಸಮರ್ಥರಾಗಿ ಇತರ ತತ್ತ್ವಾಭಿಮಾನಿದೇವತೆಗಳ ಉತ್ಕ್ರಮಣವನ್ನು ಹೇಳಿರುವದರಿಂದ ವಿರೋಧ ಬರುವದು. ಇದನ್ನು ಮಂಕಾಲಧರ್ಮಾಚಾರ್ಯರು 'ಕಲ್ಪಭೇದೇನ ವಾ, ಏಕಸ್ಮಿನ್ನೇವ ಕಲ್ಪೇ ದ್ವಿವಾರಮುತ್ಕ್ರಮಣಪ್ರವೇಶಕಲ್ಪನಯಾ ವಾಽವಿರೋಧೋ ಜ್ಞೇಯಃ' ಎಂದು ಪರಿಹರಿಸಿದ್ದಾರೆ. ಒಂದೋ ಕಲ್ಪಭೇದದಿಂದ ಈ ವಿರೋಧವನ್ನು ಪರಿಹರಿಸಬೇಕು. ಇಲ್ಲವೇ ಒಂದೇ ಕಲ್ಪದಲ್ಲಿ ಎರಡುಬಾರಿ ಈ ಕಥೆ ಜರುಗಿತೆಂದು ಹೇಳಿ ವಿರೋಧವನ್ನು ಪರಿಹರಿಸಬೇಕು ಎಂದಿದ್ದಾರೆ.

ಇದೇ ರೀತಿ ತಲವಕಾರವೇದೇಶೀಯದಲ್ಲಿ ಹಾಗೂ ಕಾಠಕವ್ಯಾಸತೀರ್ಥೀಯದಲ್ಲಿಯೂ ಅನೇಕ ವೈಶಿಷ್ಟ್ಯಗಳು ಅಡಕವಾಗಿವೆ. ಅದನ್ನು ಓದುಗರು ಗಮನಿಸಬಹುದಾಗಿದೆ.

## ಕೃತಜ್ಞತಾನಿವೇದನೆ

'ಅನ್ನದಾನಂ ಮಹಾದಾನಂ ವಿದ್ಯಾದಾನಮತಃ ಪರಂ' ಎಂಬ ನಾಣ್ಣುಡಿಯಂತೆ ಎಲ್ಲ ದಾನಗಳಲ್ಲಿ ಹಿರಿದಾದುದು ಅನ್ನದಾನ. ಅದಕ್ಕಿಂತಲೂ ಮಿಗಿಲಾದುದು ವಿದ್ಯಾದಾನ. ಇವೆರಡನ್ನೂ ಸಾವಿರಾರು ವಿದ್ಯಾರ್ಥಿಗಳಿಗೆ ಅನುದಿನವೂ ಮಾಡುತ್ತಿರುವ ಮಹನೀಯರು, ಯತಿಪುಂಗವರೂ ತಪಸ್ವಿವರೇಣ್ಯರೂ ಆದ **ಪರಮಪೂಜ್ಯ ಶ್ರೀಶ್ರೀವಿಶ್ವೇಶತೀರ್ಥ ಶ್ರೀಪಾದಂಗಳವರು.** 'ಪೂರ್ಣಪ್ರಜ್ಞ ವಿದ್ಯಾಪೀಠ' 'ಪೂರ್ಣಪ್ರಜ್ಞ ಸಂಶೋಧನಾ ಮಂದಿರ' ಮುಂತಾದ ಅನೇಕ ಸಂಸ್ಥೆಗಳನ್ನು ಹುಟ್ಟುಹಾಕಿ ಅದರ ಮೂಲಕ ಲೌಕಿಕ ಜನತೆಯನ್ನು ಅಧ್ಯಾತ್ಮಮಾರ್ಗದತ್ತ ಸೆಳೆದ ಅಪಾರ ಹಿರಿಮೆ ಇವರದು. ನಮ್ಮಂಥಹ ನೂರಾರು ಪಾಮರರನ್ನು ಉದ್ಧರಿಸಿ ಸಾವಿರಾರು ಜನರ ಬಾಳಿಗೆ ಬೆಳಕಾಗಿರುವ ಪರಮಪೂಜ್ಯ ಶ್ರೀಪಾದಂಗಳವರ ಅಡಿದಾವರೆಗಳಿಗೆ ಭಕ್ತಿಪೂರ್ವಕ ಸಾಷ್ಟಾಂಗ ಪ್ರಣಾಮಗಳನ್ನು ಸಲ್ಲಿಸುತ್ತೇವೆ.

ಈ ಪುಸ್ತಕದ ಮುದ್ರಣದ ವೆಚ್ಚವನ್ನು ಭರಿಸಲು ಉದಾರಮನಸ್ಸಿನಿಂದ ಸಹಕರಿಸಿದ 'ರಾಷ್ಟ್ರಿಯ ಸಂಸ್ಕೃತ ಸಂಸ್ಥಾನ'ದ ಕುಲಪತಿಗಳಾದ **ಪ್ರೊ. ಕುಟುಂಬಶಾಸ್ತ್ರಿಗಳಿಗೆ** ನಾವು ಆಭಾರಿಗಳಾಗಿದ್ದೇವೆ.

ಈ ಗ್ರಂಥಸಂಪಾದನೆಯಲ್ಲಿ ಉಪಯುಕ್ತ ಸಲಹೆಗಳನ್ನು ನೀಡಿ ಸಹಕರಿಸಿದವರು ಸಂಶೋಧನ ಮಂದಿರದ ನಿರ್ದೇಶಕರಾದ **ಡಾ.ಎ.ವಿ.ನಾಗಸಂಪಿಗೆಯವರು.** ಅವರಿಗೆ ನಮ್ಮ ಹೃತ್ಪೂರ್ವಕ ಕೃತಜ್ಞತೆಗಳು.

ಸಂಶೋಧನೆಯ ವಿಧಾನವನ್ನು ಬೋಧಿಸಿ ಹಿಂದಿನಿಂದಲೂ ಮಾರ್ಗದರ್ಶನ ನೀಡುತ್ತಿರುವ ತಿರುಪತಿ ರಾಷ್ಟ್ರಿಯ ಸಂಸ್ಕೃತ ವಿದ್ಯಾಪೀಠದ ಮಾಜಿ ಕುಲಪತಿಗಳೂ, ಪೂರ್ಣಪ್ರಜ್ಞ ಸಂಶೋಧನ ಮಂದಿರ ಭೂತಪೂರ್ವ ನಿರ್ದೇಶಕರೂ ಆದ ಪ್ರೊ.ಡಿ. ಪ್ರಹ್ಲಾದಾಚಾರ್ಯರಿಗೆ ನಮ್ಮ ಹೃತ್ಪೂರ್ವಕ ಕೃತಜ್ಞತೆಗಳು.

ಈ ಗ್ರಂಥವನ್ನು ಸಂಪಾದಿಸುವಾಗ ಎದುರಾದ ಕ್ಲಿಷ್ಟಸಮಸ್ಯೆಗಳನ್ನು ಪರಿಹರಿಸಲು ನೆರವಾದ ವಿದ್ಯಾಪೀಠದ ಭೂತ ಪೂರ್ವ ಪ್ರಾಂಶುಪಾಲರಾದ ಶ್ರೀಹಯವದನ ಪುರಾಣಿಕರಿಗೆ ಹಾಗೂ ಹಾಲಿ ಪ್ರಾಂಶುಪಾಲರಾದ ಶ್ರೀಹರಿದಾಸ ಭಟ್ಟರಿಗೆ ನಮ್ಮ ಆದರ ಪೂರ್ವಕ ಕೃತಜ್ಞತೆಗಳು.

ಶ್ರೀರಾಘವೇಂದ್ರ ಶ್ರೀಪಾದಂಗಳವರ 'ತಲವಕಾರೋಪನಿಷತ್ ಖಂಡಾರ್ಥ'ದ ಹಾಗೂ ಕಾಠಕವೇದೇಶೀಯದ ಹಸ್ತ ಪ್ರತಿಗಳನ್ನಿತ್ತು ಸಹಕರಿಸಿದ ಪಂ. ಪ್ರದೀಪಸಿಂಹ ಅವರಿಗೂ ಆಭಾರಿಯಾಗಿದ್ದೇವೆ. ಡಿ.ಟಿ.ಪಿ ಕಾರ್ಯವನ್ನು ಸಮರ್ಥವಾಗಿ ನಿರ್ವಹಿಸಿದ ವಿದ್ವಾನ್. ಕಡ್ಡಿ ಬದರೀನಾರಾಯಣಾಚಾರ್ಯರಿಗೆ ಹಾಗೂ ಶ್ರೀಯುತ. ಸುಬ್ಬಣ್ಣನವರಿಗೆ ನಮ್ಮ ಹೃತ್ಪೂರ್ವಕ ಕೃತಜ್ಞತೆಗಳು.

ಈ ಗ್ರಂಥದಲ್ಲಿ ಓದುಗರ ಅನುಕೂಲಕ್ಕಾಗಿ ಶ್ರೀರಘುನಾಥತೀರ್ಥರಿಂದ ರಚಿತವಾದ "ಈಶಾವಾಸ್ಯಭಾಷ್ಯ ಟೀಕಾವಿವೃತಿ"ಯನ್ನು ಅಳವಡಿಸಲಾಗಿದೆ. ಈ ಟಿಪ್ಪಣಿಯು ಕ್ರಿ.ಶ.೧೯೮೨ರಲ್ಲಿ ಡಾ. ಎನ್. ಶಾನುಭಾಗ್ ಅವರಿಂದ ಮುದ್ರಿತವಾಗಿತ್ತು. ಈಗ ಆ ಪುಸ್ತಕ ಸಿಗದಿರುವದರಿಂದ ವಿಸ್ತೃತವಾದ ಆ ಟಿಪ್ಪಣಿಯ ಮಹತ್ವವನ್ನು ಮನಗಂಡು ಇಲ್ಲಿ ಅಳವಡಿಸಲಾಗಿದೆ . ಪೂರ್ಣಪ್ರಜ್ಞ ಸಂಶೋಧನ ಮಂದಿರದ ಗ್ರಂಥಾಲಯದಲ್ಲಿದ್ದ ಹಸ್ತ ಪ್ರತಿಯ ಸಹಾಯದಿಂದ ಅದರಲ್ಲಿದ್ದ ಹಿಂದಿನ ಮುದ್ರಣದೋಷಗಳನ್ನು ಸರಿಪಡಿಸಲಾಗಿದೆ. ಹಾಗಿದ್ದರೂ ಕಣ್ತಪ್ಪಿನಿಂದ ಕೆಲವೊಂದು ದೋಷಗಳು ಉಳಿದಿರುವ ಸಾಧ್ಯತೆಯನ್ನು ಅಲ್ಲಗಳೆಯಲಾಗದು. ಅದನ್ನು ಹಂಸಕ್ಷೀರನ್ಯಾಯದಂತೆ ಸುಜನರು ಪರಿಗಣಿಸಿಬೇಕೆಂದು ಪ್ರಾರ್ಥಿಸಿ ಈ ಗ್ರಂಥವನ್ನು ಅಸ್ಮದ್‌ಗುರ್ವಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ರುಗ್ಮಿಣೀ ಸತ್ಯಭಾಮಾ ಸಮೇತನಾದ ಶ್ರೀಕೃಷ್ಣನಿಗೆ ಸಮರ್ಪಿಸುತ್ತಿದ್ದೇವೆ.

ಇತಿ ವಿದ್ವಜ್ಜನ ವಿಧೇಯ,

ವಿ.ಶಂಕರ ನಾರಾಯಣ ಅಡಿಗ,

ವಿ.ರಂಗನಾಥ ಕಟ್ಟಿ

## ಪ್ರಕೃತ ಮುದ್ರಣದ ಬಗ್ಗೆ :-

ಪ್ರಕೃತ, ಮೂರು ಹಸ್ತಪ್ರತಿಗಳ ಸಹಾಯದಿಂದ ಈ ಕೃತಿಯ ಮುದ್ರಣ ಮಾಡಲಾಗಿದೆ. ಈಶಾವಾಸ್ಯ ರಘುನಾಥೀಯ ಟಿಪ್ಪಣಿಯ ಒಂದು ಹಸ್ತ ಪ್ರತಿಯು ಪೂರ್ಣಪ್ರಜ್ಞ ಸಂಶೋಧನ ಮಂದಿರದ ಗ್ರಂಥ ಭಂಡಾರದಲ್ಲಿ ಸಿಕ್ಕಿತ್ತು. ಅದರ ಸಹಾಯದಿಂದ ಹಿಂದಿನ ಮುದ್ರಿತ ಪುಸ್ತಕದ ಪಾಠದೊಂದಿಗೆ ಹೋಲಿಸಿ ಶುದ್ಧಪಾಠವನ್ನು ನೀಡಲು ಪ್ರಯತ್ನಿಸಲಾಗಿದೆ. ಶ್ರೀರಾಘವೇಂದ್ರತೀರ್ಥರ ಖಂಡಾರ್ಥಕ್ಕೆ ಸಂಬಂಧ ಪಟ್ಟಂತೆ 'ಶಮ್ಯಾಪ್ರಾಸ' ಗ್ರಂಥಾಲಯದಲ್ಲಿದ್ದ ಎರಡು ಹಸ್ತಪ್ರತಿಗಳನ್ನು ಬಳಸಿಕೊಳ್ಳಲಾಗಿದೆ. ಸಂಶೋಧನ ಮಂದಿರದ ಗ್ರಂಥಾಲಯದಲ್ಲಿದ್ದ ಒಂದು ಹಸ್ತಪ್ರತಿಯ ಸಹಾಯದಿಂದ 'ಷಟ್ಪ್ರಶ್ನೋಪನಿಷತ್ ಮಂಕಾಲೀಯ ಟಿಪ್ಪಣಿ'ಗೆ ಪಾಠಾಂತರಗಳನ್ನು ಸಂಶೋಧಿಸಿ ಕೊಡಲಾಗಿದೆ. ಈ ಪ್ರಯತ್ನವನ್ನು ಸಹೃದಯ ವಿದ್ವಾಂಸರು ಕರುಣಾಪೂರ್ಣ ದೃಷ್ಟಿಯಿಂದ ಕಾಣಬೇಕೆಂದು ಸವಿನಯ ಪ್ರಾರ್ಥನೆ. ಮುದ್ರಿತ ಪುಸ್ತಕ ಪಾಠಕ್ಕೂ ಸಂಶೋಧಿತ ಪ್ರಸಕ್ತ ಮುದ್ರಿತ ಪಾಠಕ್ಕೂ ಇರುವ ವ್ಯತ್ಯಾಸದಲ್ಲಿ ಕೆಲವನ್ನು ಮಾತ್ರ ಸ್ಥಾಲೀಪುಲಾಕನ್ಯಾಯದಿಂದ ಉದಾಹರಣೆಗಾಗಿ ಕೆಳಗೆ ಕೊಡಲಾಗಿದೆ.

### ಈಶಾವಾಸ್ಯೋಪನಿಷತ್ತಿನ ರಘುನಾಥೀಯ ಟಿಪ್ಪಣಿಯ ಶುದ್ಧಪಾಠಗಳು

| ಪೂರ್ವಮುದ್ರಿತ ಪಾಠ | ಪುಟ ಸಂಖ್ಯೆ | ಪ್ರಸಕ್ತ ಮುದ್ರಿತ ಪಾಠ |
|---|---|---|
| १. ईशजगतोः स्वातन्त्र्य-साधनस्यैव | ४७ | ईशजगतोः स्वातन्त्र्य-पारतन्त्र्यसाधनस्यैव |
| २. अस्ततद्दत्तेनेति | ४८ | अतस्तद्दत्तेनेति |
| ३. एवमृक्तप्रकारेणेति | ४८ | एवमुक्तप्रकारेणेति |
| ४. प्रयागनिर्वाहाय | ४८ | प्रयोगनिर्वाहाय |
| ५. अयं मन्त्रो परोक्ष-ज्ञानिपरत्वेन | ५० | अयं मन्त्रोऽपरोक्षज्ञानि-परत्वेन |
| ६. अपरमार्थत्वे निष्फलत्वे वा | ५३ | अपरमार्थत्वे निषिद्धत्वे निष्फलत्वे वा |

| | | |
|---|---|---|
| ७. असुरशब्दोपपाद्य | ५६ | असुरशब्दोपपदाद् |
| ८. तमसा आवृत्ताः | ५९ | तमसा आवृताः |
| ९. कर्मनामसु अपठितत्वाच्च | ६२ | कर्मनामसु पठितत्वाच्च |

## ಖಂಡಾರ್ಥಕ್ಕೆ ಸಂಬಂಧಪಟ್ಟ ಶುದ್ಧಪಾಠಗಳು

| ಪೂರ್ವಮುದ್ರಿತ ಪುಸ್ತಕದ ಪಾಠ | ಪ್ರಸಕ್ತಮುದ್ರಿತ ಪಾಠ | ಪುಟ ಸಂಖ್ಯೆ |
|---|---|---|
| १. भक्तेभ्योऽभीष्टदायिने | भक्ताभीष्टप्रदायिने | ५०१ |
| २. वायुरिति | वायुरपीति | ५०२ |
| ३. न भवत्वन्येषां कात्स्र्न्येन ब्रह्मज्ञानित्वं | अन्येषां कात्स्र्न्येन ब्रह्माज्ञानित्वेऽपि | ५०६ |
| ४. यस्याज्ञातः | तस्याज्ञातः | ५०७ |
| ५. 'ब्रह्म इत्यारभ्य 'पुमान्' इति वा' इत्यन्तः पाठः पूर्व- मुद्रितपुस्तके नास्ति। | श्रुतं मतं ब्रह्म प्रतिबोधेन स्वस्वयोग्यापरोक्षज्ञानेन विदितं चेदमृतत्वं मुक्तिं विन्दते लभते पुमान् इति वा | ५०८ |
| ६. प्रापयतीत्यर्थतया | प्रापयतीति ण्यर्थतया | ५०८ |
| ७. हेत्याश्चर्यम् | हेत्याश्चर्ये | ५०९ |
| ८. व्यजानन्त | व्यजानत | ५१० |
| ९. इति चोवाच ह्वै | इति चोवाच देवी | ५१२ |
| १०.'ते' इति पदं मुद्रितपुस्तके नास्ति | ते अग्निवाय्विन्द्राः | ५१३ |
| ११. आदीपयदिति | अदीपयदिति | ५१३ |
| १२. आस्त्विति निपातस्य' इति मुद्रितपुस्तके नास्ति | आ इति निपातस्यआस्त्विति निपातस्य च सत्वेन | ५१४ |
| १३. प्रगृह्याकारस्य | प्रगृह्यसञ्ज्ञकाकारस्य | ५१४ |

| | | |
|---|---|---|
| १४. तस्यानिरुद्धस्य | तस्यानिरुद्धाख्यस्य। | ५१४ |
| १५. तद्वनमित्येवंरूपेण | तद्वनंनामेत्येवंरूपेण | ५१५ |
| १६. अनन्तगुणपूर्णाय | समस्तगुणपूर्णाय | ५१५ |
| १७. श्लोकोऽयं मुद्रितपुस्तके नास्ति | श्रीमत्तलवकारार्थ-<br>सङ्ग्रहोऽयं मया कृतः ।<br>राघवेन्द्रेण यतिना<br>प्रीयतां तेन केशवः ।। | ५१५ |
| १८. उपनिषदः | काठकोपनिषदः | ५१७ |
| १९. उक्तिप्रकारमेवाऽह । एवं श्रद्धाविष्टः स पुत्रः पितरमुवाच । ह किलेत्यर्थः । | एवं श्रद्धाविष्टः स पुत्रः<br>पितरमुवाच । ह किलेत्यर्थः ।<br>उक्तिप्रकारमेवाऽह -तातेति ।। | ५१८ |



## FOREWORD TO FOUR उपनिषद् 'S

I have great pleasure in writing this foreword to four उपनिषद्s viz. ईश, केन, प्रश्न and कठ being published by Purnaprajna Samshodhana Mandiram along with भाष्य by Sri Madhwacharya and other commentaries and notes. The term उपनिषत् means literally 'Secret'. I am afraid whether I am revealing the secrets hidden by our ancient sages. Yet, I would like to introduce these four उपनिषत्'s to the students of वेदान्त.

## ईशोपनिषत्

Layout of the उपनिषत् :

Every one of the branches of वेद contains a संहिता portion followed by a ब्राह्मणम् and tailed with an आरण्यक or उपनिषत् So also is शुक्लयजुश्शाखा tailed with ईशोपनिषत्.

The Eighth volume of श्रीमद्भागवत narrates a story related to this उपनिषत् . स्वायंभुवमनु who happes to be Lord चतुर्मुखब्रह्मा's son was practising this उपनिषत् on the banks of the sac.ed river सूनन्दा . His opponent demons tried to swallow him up virtually. At this moment, Lord विष्णु manifested himself as यज्ञ and killed those demons.

This उपनिषत् although short, containing only twenty hymns, brings out many important virtues vested in Almighty God. At the very outset, the उपनिषत् stresses on two qualities necessary for a person who would like to go through this उपनिषत्. These two qualities are contentment and dutifullness. In this context, contentment refers to be content with what the God has granted to oneself without urging for material benefit from monorchists. The term dutifulness is used to mean one's own duty as laid out in वेदा's according to his वर्ण and आश्रम. Even a person who has already realized, suffers lack of happiness after attaining salvation, if he does not stick to the core and conduct laid out in वेदाs. Only a person possessing these two basic qualities is entitled to acquire the knowledge of this उपनिषत् It is very essential to acquire correct knowledge. Meditating on God in an incorrect way leads to permanent hells. God's correct knowledge is termed विद्या and incorrect knowledge is termed अविद्या. A person who is concentrated in विद्या without refuting अविद्या would fall into hades deeper than the hades approached by a person who sticks on to अविद्या. So it is also very much essential to refute अविद्या.

One has to accept the God as creator as well as destroyer. A person who does not accept either of them is sure to fall down into hades.

Just as one should acquire God's correct knowldege, so also one should acquire वायु's correct knowldege.Finally, the Upanisad ends with a benedictory verse praying Lord अग्नि and offering Salutations to him.

**Sri Madhvacarya's भाष्यम् and श्रीजयतीर्थ's comentary.**

Sri Madhavacharya, the founder of Dvaitha school of वेदान्त has written भाष्यम्s on all of the ten उपनिषद्s. The special features of his भाष्यम्s are simplicity, lucidity and Unambiguousness. Sharp and brisk statements of the भाष्यम्s lead a reader to the exact heart of the उपनिषद्s.

Coming to the ईशोपनिषद् भाष्यम्, one cannot miss at the outset a prelude narrated by आचार्य to the उपनिषत्. This is very similar to the style followed by him in ब्रह्मसूत्रभाष्यम्. श्रीजयतीर्थ, the well known commentator of मध्व's works explains the necessity for giving this preclude. It is metioned by the भाष्यकार that मनु praised Lord यज्ञ through this उपनिषत्. Thereby he has indicated that मनु is the ऋषि and Lord यज्ञ is the देवता of this उपनिषत्. It is essential to know the ऋषि, छन्दस्, and देवता of Vedic hymns before starting to chant them and understand them.

In the third hymn which describes the hades to be attained by persons opposed to God, there is a word असुर्याः. It appears that this word means a place where Sun's light does not fall. Subsequentlly it is mentaioned that these hades are full of pitch darkness. Once it is mentioned that there is pitch darkness, it goes without saying that Sun's rays do not fall there. Hence Shri आचार्य interprets this word in two other ways. The letter र्य stands for happiness beings derived from the root रमु which means 'to be happy'. सु stands for 'very much'. The letter अ in the beginnig stands for negation. Thus असुर्य means

very much sorrow. Another interpretation is as follows असुर means demon, य is generated by the root या meaning 'to attain'. Since hades are attained by demons, they are called असुर्य.

The Seventeenth hymn contains a phrase. सोऽहमस्मि Apparently this means 'I am He'. The अद्वैत commentators have thought that this phase clearly mentions the doctrine of अद्वैत . If that were true, all the attributes given to Him so far in the उपनिषत् would become meaningless since I stands for जीव who is void of such attributes. Hence श्रीआचार्य intreprets the words "अहं" and "अस्मि" also as attributes to God. He is called अहम् as he is indispensable. He is called अस्मि as he exists for all times to come.

The eighteenth hymn, which praises Lord वायु as well as his अन्तर्यामि, is misinterpreted by other commentators. According to them, this hymn is a prayer meaning as follows. May वायु residing in our material body leave our body and get entangled with God वायु . Let our body be burnt to ashes thereafterwards.' श्रीजयतीर्थ opposes this interpretations as follows. The two things deemed to be prayed for in this hymn, are natural phenomena. There is no need to pray for phenomena which happen naturally. Although it appears from the context that this hymn is offering a prayer, this view should be given up since it stands against reasoning . उपपत्ति (Reasonings) is stronger than the context (प्रकरण). If so, what is the correct meaning of this hymn? Here is the answer. The word 'अनिलम्'

should be changed to 'अनिलः' either by changing the gender or case. The letter अ stands for Brahman. निल means adobe, Since ब्रह्मन् is the abode for वायु, He is called 'अमृत'. The word 'अमृत' stands for immortal. The prime immortal is राम and the subsequent immortal is वायु since his knowledge is never masked. रामसंहिता is in accordance with this interpretation.

The ninteenth hymn apparently means "Oh! Lord, keep remembering me". God's knowledge is eternal. He is never forgetting. So where is the necessity to pray him for remembering us? Sri आचार्य quotes from ब्रह्मतर्क and interprets the prayer as 'Please be faced towards us with benevolation'. Explaining आचार्य's stand, श्रीजयतीर्थ passes the following comment. Rememberance generates from the mind after the knowledge perishes leaving its impression on the mind. Since God's knowledge is eternal, there is no question of its perishment. Hence, God is devoid of rememberance. Therefore, the prayer should be interpreted indirectly. It is impossible to bring forth completly the salient features of भाष्य and टीका in a short introduction like this. Reader's attention is drawn towards only a few examples.

SRI RAGHUNATHATHIRTA'S GLOSSARY

It is not clear to as who is this रघुनाथतीर्थ, the commentator of ईशावास्यभाष्यटीका. He may be the famous शेषचन्द्रिकाचार्य or रघूत्तमतीर्था's paramaguru or someone else. There is absolutely no mention of his Guru anywhere in his work. Whoever he may be, his glossary on ईशावास्यभाष्यटीका is perhaps the most elabrate glossary amongst the avail-

able ones. In this glosaary he has attempted to explain almost every one of the statements in टीका, drawing the readers' attention to the particular words or phrases or sentences used by श्री जयतीर्थ in his टीका. At certain stages, the भाष्यकार's statements are also commented directly. Here are a few examples which reveal the author's deep thinking.

The भाष्यकार offers salutation to यज्ञभुक् in his benedictory verse.The Tikakara has prayed to Lord हरि in his benedictory verse. This does not provoke any thought for a person who does not read in between lines. रघुनाथतीर्थ on the other hand observes that the term हरि used by टीकाकार is in very much accordance with the term यज्ञभुक् used by the भाष्यकार. It is mentioned in गीताभाष्यम् that विष्णु is called हरि since he accepts his own portion in all of the offerings made in यज्ञs. This is in fact the meaning conveyed by the term यज्ञभुक्. श्रीरघुनाथतीर्थ in turn dicussess the nature of भोग done by Lord हरि. One of the explanations offered by him in accordance with ऋग् भाष्य is as follows. Lord हरि does not gain anything for himself by swallowing or accepting the offering done is यज्ञs. He accepts सोम offered in सोमयाग thereby inducing power in यजमान i.e. the offerer of सोम.

The generally accepted पदपाठ (splitting of words) in the beginning of the उपनिषत् is ईशा वास्यम्. But मध्वाचार्य has treated the word ईशा वास्यम् as a compound word. Let alone the interpretation of this word. How did the भाष्यकार

violate the generally accepted पदपाठ ? रघुनाथतीर्थ offers two explanations to this violation. In the first place, the accepted पदपाठ may by folly. There are other instances to such folliness as mentioned in ऋग्भाष्य while commenting on द्रवत्पाणी शुभस्पती. Secondly, a भाष्यकार is deemed to possess knowldege of a number of branches of Vedas. It is quite possible that this is a compound word in a branch visualized by some the ऋषि. आचार्य might have treated the word as single accordingly to that ऋषि. It is also apt to treat this as a single word because the eighth volume of श्रीमद्भागवत which narrates an epic tale relating to this उपनिषत् stanza carrys a very similar to the opening hymn of ईशोपनिषत् and conveying the same meaning. In this stanza the opening word is आत्मावास्यम्. The second vowel is a long vowel. This is in accordance with the single word ईशावास्यम् as the terms आत्म and ईश both refer to Lord विष्णु. On the other hand, if the word ईशा is taken as the singular form of the instrumental case and the word वास्यम् is separated, the compounded word in भागवतम् should read as आत्मवास्यम् i.e. with short vowel. This discussion clearly indicates the author's keen observation of grammatical points while interpreting the words used in उपनिषत्.

There are several more grammatical discussions in रघुनाथतीर्थ's works, but all of them cannot be cited here.

## प्रकाशिका BY श्रीवादिराजतीर्थ

श्रीवादिराजतीर्थ's प्रकाशिका on ईशोपनिषद् भाष्यटीका explains not

only the statements of टीका but also statements of भाष्यम् as well as उपनिषत् directly at certain stages. Certain examples follow.. In the preclude to this उपनिषत्, the भाष्यकार has given an attribute to Lord यज्ञ as भगवान् . टीकाकार states that this attribute is given to indicate that यज्ञ is worshippable. श्रीवादिराज 's observations in this context is as follows.

The term भगवान् stands for a person full of six virtues like knowledge. If so, why did the टीकाकार interpret the term as worshippable? The answer is as follows. मनु happens to be यज्ञ's मातामह i.e. mother's father. One may doubt as to how did a grandfather prayed and praised his own grandson. In order to clear this doubt, टीकाकार has interpreted the term भगवान् as worshippable. His opinion is that यज्ञ is worshippable as he is the God's very manifestation, although he happens to be मनु's grandson.

The word ईशावास्यम् is interpreted by other commentators as "masked by ईश्वर". श्रीवादिराजतीर्थ refutes this commentary in his own style not indicated either in भाष्यम् or टीका . मायावादिन् cannot say that the world is masked by ब्रह्मन् . In fact मायावादि accepts that ईश्वर exhibits an illusive world through his माया. How else can he attempt to prove that the world is an illusion by reasoning that it is visible? If the world was masked by ईश्वर, it would be invisible ! Moreover Lord वराह has brought the world out of sea water

which was masking it and has established the same on surface of sea water through his great powers. So,how can it be masked by ईश्वर? Moreover, Lord कृष्ण states in his गीता that the so called luminous bodies Sun, Moon and Fire depend on himself for their luminous nature. On account of this also, one has to accept that ईश्वर never masks the world. According to the मायावादि it is ब्रह्मन् who is masked by ईश्वर's माया. Therefore, if an object has to be given up for the reason that it is maksed by माया, it boils down to say that ब्रह्मन् should be given up and not कर्म. Moreover , why should one give up कर्म if the world is masked by ईश. If the मायावादि says that कर्म is a part and parcel of the world which is masked and hence it should be given up, it can also be argued that even knowldege leading to salvation should be given up as knowledge also is part and parcel of the world. Great scholars like Pandavas have conducted राजसूययज्ञ by their hard work. Therefore, it is not proper to state that a scholar should give up कर्म. Lord कृष्ण, has himself induced अर्जुन to take up war against the evil forces and not to giveup war. So, wherever it is stated that कर्म should be void, the term कर्म stands for काम्यकर्म i.e कर्म observed for worldly profits. कर्म in accordance with वर्ण and आश्रम should never be void. For all these reasons, it appears to us that मायावादि has offended the उपनिषत् instead of interpreting it in the correct way, just like a monkey would do a pearl garland.

The sixth hymn of the उपनिषत् states that a person who

visualizes all the beings in आत्म, need not fear any body. The अद्वैत commentator has mentioned that this hymn goes to say that जीव is indentical with all the beings. This is not correct since it is agiainst the सौकर्याणश्रुति quoted by श्रीमध्वाचार्य. At this stage, श्रीवादिराजतीर्थ makes the following observation. Instead of saying that जीव is indentical with all the beings, one may try to give literal translation of the hymn as "All beings reside in जीव himself. This is also incorrect because all the other souls do not reside in one soul. According to us, आत्म stands for विष्णु . It is clearly metioned in गीता that all the souls like चतुर्मुखब्रह्मन् and शिव reside in विश्वरूप. So, there is no problem for us even to translate the hymn literally.

Thus प्रकाशिका which throws light on many aspects of the उपनिषत् is significanly named प्रकाशिका.

## श्रीराघवेन्द्रतीर्थ 'S खण्डार्थ

खण्डार्थ by श्रीराघवेन्द्रतीर्थ is perhaps the best glossary on उपनिषत् for a person who would like to understand the उपनिषत् word by word. खण्डार्थ is in fact a word to word translation of the उपनिषत् in a simple and direct manner. Before giving word to word translation of each hymn, खण्डार्थ also provides a short introduction to each hymn bringing out the order of the hymn in the उपनिषत्. One cannot dispense with खण्डार्थ if one would like to grasp the correct meaning of the उपनिषत्. Grammatical points are

also discussed at several stages. These comments apply to every one of the खण्डार्थ's written by श्रीराघवेन्द्रतीर्थ.

The phrase योऽसावसौ appearing in seventeenth hymn is interpreted in two ways a) One of the two words असौ and असौ is the singular form of locative case of the term असु meaning मुख्यप्राण. Another असौ stands for a pronoun meaning 'this'. Thus the phrase means "This famous person residing in मुख्यप्राण". b) Both the words are singular forms of nominative case of the term इदम् meaning 'this'. Dual meniton is to cover all of the God's forms residing in all of the souls.

It was mentioned earlier that वायु is also immortal. श्रीराधवेन्द्रतीर्थ draws the reader's attention to ब्रह्मसूत्र (2-3-8) in this context.

At the end of the खण्डार्थ, श्रीराघवेन्द्रतीर्थ mentions that he has prepared this खण्डार्थ as his students urged him to do so.

## केनोपनिषत्

केनोपनिषत् which is also known as तलवकारोपनिषत् belongs to तलवकार branch of सामवेद. This उपनिषत् is in the form of a conversation between शिव and चतुर्मुखब्रह्मन्. The उपनिषत् is divided into four sections.

शिव questions ब्रह्मन् as to who is the inspirer of mind, प्राण and other organs like ear,eye and voice. ब्रह्मन् replies that the inspirer of all the organs including mind and

प्राण is विष्णु. He sees every thing, but no one can visualize Him completely. He hears everything, but no one can hear Him completely. He understands everything, but no one can understand him completely. He is not inspired by प्राण but he is प्राण's inspirer.

The second section also stresses the same point that विष्णु cannot be completely known, analyzed or visualized. A person who thinks that he is known, analyzed or visualized विष्णु does not know anything about विष्णु since he has an illusion as to have known the unknown विष्णु. In fact, a person who thinks that he does not know विष्णु, knows at least something about विष्णु because he knows that विष्णु cannot be completely known.

The last two sections narrate an epical tale related to what is mentioned in the first two sections. देवता's fought against demons and conquered them. They thought that the victory was their own, forgetting the Almighty's insrpiration. The Almighty विष्णु manifested himself in the guise of a यक्ष along with वायु, शिव and पार्वति. The देवता's sent अग्नि i.e. deity of fire to investigate as to who is this यक्ष. When अग्नि approached the Yaksha, the latter questioned him as to who is he. अग्नि stated with arrogance that he is अग्नि, the deity of fire. In turn, यक्ष questioned as to what is his power. अग्नि replied that he is capable of burning down anything to ashes. Then the यक्ष placed a straw in front of him and asked him to burn it. अग्नि approached the straw with all his vigour, but could not burn

it. He returned terrified himself. Next, वायु the deity of wind was sent by the देवता's to indentiy the यक्ष. Once again, the यक्ष himself questioned वायु as to who is he and what is his power. वायु boasted that he is वायु, who can fly off anything in the world. यक्ष once again placed the same straw and asked him to fly it off. Although वायु approached the straw with all his might, he could not fly it off. He also felt afraid and returned. The next was Indra's turn to indentify the यक्ष. On seeing देवेन्द्र approaching him, यक्ष disappeared along with his followers leaving behind पार्वति to teach इन्द्र. पार्वति taught इन्द्र that देवता's victory was not their own, but it was actually Almighty's victory.

At the end of the उपनिषत्, शिव requests ब्रह्मन् to teach him the abodes of knowldege and the essential qualifications for a person to grasp this the knowldege of this उपनिषत्, . Accordingly ब्रह्मन् mentions to him the fourteen abodes of knowledge and three qualifications.

## तलवकारभाष्यम् BY श्रीमध्वाचार्य

One of the special features of the भाष्यम् is splitting the word उपासते as उप आस ते. Although the same भाष्यकार has treated it as single word in his ब्रह्मसूत्रभाष्यम् (Ref. ब्रह्मसूत्र 3-2-37), he has treated it as three words here. This is in accordance with the statements in ब्रह्मसार quoted by him in तलवकारभाष्यम्. Some of his present opponents have arised an objection to this splitting that is is against the traditional पदपाठ. The same comments as mentioned

while discussing the word ईशावास्यम् in the introduction to ईशोपनिषत् apply to this case also. Another objection arised here is as follows. The word उपासते carries a स्वरितस्वर on the letter स. This can be accounted for only when this is treated as a single word. पाणिनि's sutra states "तिङ् तिङः" which means that a तिङन्त following a अतिङन्त carries अनुदात्तस्वर on all of its vowles. In such a case, the second अनुदात्त would be changed to a स्वरित. If the splitting is accepted as done by मध्वाचार्य, आस is not at all a तिङन्त. So, the स्वरितस्वर cannot be accounted for. Although none of the available, माध्व commentaries has dealt with this, there is however an indication in श्रीराघवेन्द्रतीर्थ's खण्डार्थ. He mentions that the word आस is a तिङन्तप्रतिरूपक अव्ययम् i.e an indeclinable standing for a verb. Since such an indeclinable is used in the place of a verb, the rules pertaining to तिङन्त apply equally well to this अव्यय also . So, श्रीआचार्य is not wrong is splitting the word.

Another special feature of the भाष्यम् lies in explaining the hierarchy amongst the देवता's appearing in this context. ब्रह्म, वायु, शेष, गरुड, and शिव along with their wives were not arrogant like the other deities, like इन्द्र. So, they are greater than all those deities. इन्द्र was the first person to find out who was that यक्ष and to explain the same to the other deities. So, he is next in this hierarchy. Deities like दक्ष, बृहस्पति, अनिरुद्ध, सूर्य, चन्द्र and वरुण stated that it is worthwhile investigating the यक्ष. Hence they come after Indra

in hierarchy. काम was the first person to make this statement. So, he is next only to इन्द्र and above the deities like दक्ष. नासिक्यवायु and अग्नि tried to investigate the यक्ष, but failed. Hence they come at the end.

While mentioning the ceats of knowledge there is a word सत्यं in the उपनिषत्. If we take the meaning of this word as "truth", it does not fit in the context. Hence श्रीआचार्य has given its meaning as मीमांसा. Why is मीमांसा called सत्यम् ? श्रीआचार्य quotes from शब्दनिर्णय which states that मीमांसा is called सत्यम् since it truly decides the statements of वेदs and स्मृतिs.

## प्रकाशिका BY श्रीवादिराजतीर्थ

The भाष्यम् mentions that the aforesaid conversations between शिव and ब्रह्म took place at वैजयन्त. प्रकाशिका explains what is this वैजयन्त. वैजयन्त is a very tall mount of the mountain मेरु, There is a ब्रह्म's abode at वैजयन्त also.

While discussing as to who is the inspirer of all our organs, श्रीवादिराजतीर्थ leaves interesting notes. The individual souls residing in their bodies cannot be taken as inspiries of their own organs, because the ऋग्वेद (6-9-6) says, "My organs are going in opposite direction", "My" applying to ऋषि भरद्वाज. This means that जीव cannot control his own organs by himself. Can we accept the concerned deties as the inspirers? The answer is a blunt "No" because, in the hymn निषुसीद गणपते, the Lord of all organs is prayed for his gracious presence in all of the

organs to insprire them . This is in accrodance with मनु's prayer to the मत्स्य incoronation. So, the उपनिषत् knocks out all the doubts just as policemen do thieves.

It is said in the उपनिषत् that our organs are forcibly inspired by God. श्रीवादिराजतीर्थ cites a beautiful example for this . Sometimes we bite our own tounge while eating. One has to keep remembering God even while eating. When a devotee has forgotten the God and is eating to please his tongue, God makes him bite his tongue himself, thereby forcing his mind to remember God.

The भाष्यम् states that God is neither knowable nor unknowable. This appears self contradictory at the outset. Hence, प्रकाशिका explains this statement as follows. God is not completely knowable. On the other hand he is not completely unknowable like rabbit's horns. He can be known by जीवs according to their own abilities.

It is mentioned in the third section that the यक्ष disappeared along with his squad leaving behind पार्वति alone. प्रकाशिका reasons out this instance with a concrete example. पार्वति happens to be इन्द्र's direct preceptor. So, God who was in guise of यक्ष ordered पार्वति to teach इन्द्र properly. The यक्ष disappread with his squad because he did not want to teach इन्द्र who was arrogant being invaded by demonic forces. पार्वति being the direct Guru can bare with some mistakes in Indra just as a mother with mistakes in her child.

Thus प्रकाशिका is very useful in understanding the उपनिषत् as well as the भाष्यम् .

## श्रीराघवेन्द्रतीर्थ's खण्डार्थ

Apart from giving word to word meaning, खण्डार्थ throws light on several grammatical points and inter relelates the उपनिषत् and ब्रह्मसूत्रs. Here are certain examples.

It is mentioned that the उपनिषत् is in the form of a conversation between शिव and ब्रह्मन्. Does not शिव know the matter explained by ब्रह्मन् ? One cannot say that he does not know because he is considered as the deity giving knowledge. If he alrady knows the matter, why does he question ब्रह्मन् ? श्रीराघवेन्द्रतीर्थ comes up with three answers. Although शिव knows the things, he questions in order to know more about the same, to confirm what he already knows and to grace the world with knowledge through his conversation with ब्रह्मन्.

Brahman mentioned to शिव that विष्णु is not only inspirer of organs but also Prana's inspirer. This is in accordane with ब्रह्मसूत्र (1-4-3). ब्रह्मन् states that the inspirer of all the organs is essentially different from the known and the unknown world. He says that he "had heard" so from people like व्यास. The word used is शुश्रुम which stands for past perfect tense. Such an usage is made to indicate that this was heard long ago. Deep grammatical discussions can be found in the last section also.

The second section declares that a ब्रह्मज्ञानी is definite of attaining salvation. This is in accordance with ब्रह्मसूत्र (3-3-35). It is also mentioned that one attains वीर्य by आत्मन् and attains salvation by विद्या. As the idea is not clear here,

श्रीराघवेन्द्रतीर्थ probes into this statement and makes it clear that one attains greater happiness by one's efforts like यज्ञ and attains salvation by God's vision. Thus खण्डार्थ is also very useful in understading the उपनिषत्.

## कठोपनिषत्

कठ or काठकोपनिषत् is in the form of a conversation between यम, the deity of Death and नचिकेत a sage boy. नचिकेत happens to be उद्दालक's son. Once upon a time, उद्दालक was offering to Brahmins whatever he possessed. The cows being offered by him were so meek that they were unable even to chew the cud or drink water. The young boy नचिकेत protested against this politly stating that it would be better if he himself were offered instead of such cows. His father got angry and told him that he would offer him to यम. In other words, he cursed the boy to be dead. Immediately the boy left his body and went to यम's abode. यम was not present in his house. His wife श्यामला invited the ब्रह्मचारी and intended to offer pooja to him . But the boy did not accept the puja as the head of the family was not present. He was waiting for यम without eating any food. On यम's return to his house, his wife mentioned to him of नचिकेत's stand and requested him to offer पूजा to theब्रह्मचारी immediately because a guest who resides in a host without eating food would result in loss of all of the host's cash or kind. यम invited the boy and offered to him three boons since he was awating for him for the past three nights.नचिकेत said that the first boon he would bid for his father's peace of mind. He requested यम that his

father should not reveal that he was dead. यम granted this boon remarking that उद्दालक would feel as if नचिकेत had gone to some other village and returned. As for the second boon, नचिकेत requested यम to explain to him God's existance in अग्नि, the deity of Fire. यम gave the explanation. यम was pleased on नचिकेत's re-narration of the same and presented him a golden necklace. He also named that particular अग्नि 'नाचिकेताग्नि'. As for the third boon, नचिकेत wished to know about Lord विष्णु who resides in मुक्तजीव ie. a soul who has attained salvation. As this is a great secret, यम did not like to reveal it. He offered to नचिकेत a number of wordly lures instead of this knowledge. But, नचिकेत did not accept any one of them. He stuck on to his request for the said knowldege. यम was pleased to grace him with the same knowledge. It is mentioned at the end of the first chapter of the उपनिषत् that chanting this उपनिषत् at the time of श्राद्ध would fetch infinite God's grace.

## श्रीमध्वाचार्य 'S भाष्यम्

It is mentioned in the उपनिषत् that यम presented an अनेकरुप शृङ्का to नचिकेत. According to मध्वाचार्य this stands for a golden necklace. How does the word अनेकरुप give the meaning golden? Sri आचार्य cites from a कोश named अभिधानम् . The citation means that the words बहुरुप, पुरट and कार्तस्वर are synonyms, कार्तस्वर means gold. बहु and अनेक are also synonyms. So अनेकरुप is aptly annotated as gold. In fact Sri आचार्य has quoted from अभिधानम् it several other places also in his works. Unfortunately, this कोश is not available

now.

In the first section of काठक , it is mentioned that a person who grasps correct knowledge of the bricks used for constructing a यज्ञकुण्ड i.e. a basin of fire used for offerings, would attain freedom from bondages. This appears absurd because knowldege of bricks which are themselves inanimate cannot free a preson from bondages. Hence, श्रीआचार्य properly interprets the hymn and makes it clear that one has to know विष्णु who is the देवता of bricks and who resides in three hundred and sixty bricks used for preparation of a यज्ञकुण्ड with as many forms of his own.

नचिकेत speaks to यम, "Some of them say that there is existence after a person departs while some of them say that there is no existance. I would like to know this correctly". Other commentators have taken this departure as death. But, as नचिकेत has himself died and gone to यम's abode, he has no doubt as to whether the soul exists or not after death. Hence आचार्य says that the departure mentioned here is the final departure from this world to the abodes of salvation. नचिकेत's curiousness is to know about the God who inspires a soul after he attains salvation.

यम mentions to नचिकेत that he has approached नित्य i.e infinite through, अनित्यद्रव्यs i.e finite things. श्रीआचार्य opens this nutshell as follows. The word "अ" stands for विष्णु since the श्रुति says "अ इति ब्रह्म". "नित्य' also means विष्णु who is infinite. So, यम means that he has approached विष्णु

through the things sacrifised to विष्णु who is also called "अ". Others have attempted to interpret this as, "I have attained myself which is infinite through finite things like mind and organs". This is incorrect as the question and answer in this context don't apply to जीव. In this context, there is a name "उरुगाय' mentioned. This is unambiguosly विष्णु's name. This also shows that the statement of the उपनिषत् should not be interpreted in favour of जीव.

There are several other subtle points disscussed in the भाष्यम्.

## प्रकाशिका BY श्रीवादिराजतीर्थ

The facts that a) नचिकेत died and went to यम 's abode, b) श्यामला offered पूजा, but नचिकेत did not accept the same saying that the head of the family was not present are not clear in Katha although they are clear in the स्मृति, गीतासार quoted by श्रीआचार्य. प्रकेशिका explains this as follows. It is said in व्यासतीर्थ टीका that one has to fill up the gap as "Wife spoke to यम after he came back". In between the two hymns अनुपास्य and वैश्वानर in the उपनिषत्. Otherwise there is no room for wife's speach. Hence, the स्मृति also fillup the blank suitably. The boy's death in not mentioned by the श्रुति since death is inauspicious. The स्मृति mentions the boy's mentality on puja being offered by शामला. But the श्रुति does not mention it because a household wife is entitled to offer puja to a guest. This is doubtless because a wife is entitled even to perform rituals in अग्नि

when her husband has gone to some other place. नचिकेत did not accept puja and fasted on the other hand in order to generate compassion in यम.

Refering to the word प्रेत which means one who has departed his body, श्रीवादिराजतीर्थ draws our attention towards the prefix in the word विस्रंसमानस्य. Departure from the material body takes place at the time of death. There is one more ultra microscropic body called लिङ्गदेह. Departure from this body is only at the time of salvation. In order to indicated this departure the श्रुति has given the prefix 'वि'. So, the context applies to one who has attained salvation but not merely one who has died.

Although यम offered many wordly comforts, नचिकेत did not accept them remarking that none of them is eternal. But, the same नचिकेत has bid for his father's peace of mind. Is not this also different from eternal bliss? प्रकाशिका has a nice answer to this question. A preceptor teaches and orders his student while sending him back to his sweet home that he should treat his parents as deity. Such a treatment is essentil for one to get the eternal bliss. So, bidding for father's peace of mind is well in accordance with the regulations to be followed to attain salvation. All of the interesting points in प्रकाशिका cannot be highlighted in a brief introduction like this. Only a few examples are cited here.

## GLOSSARY BY श्रीवेदेशतीर्थ

श्रीवेदेशतीर्थ who happens to be श्रीरघूत्तमतीर्थ's deciple , is

